## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1095 |
| ಸದಸ್ಯರ ಹೆಸರು | ಶ್ರೀ ಎನ್.ಎಸ್.ಬೋಸ್‌ರಾಜು(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 13.03.2020. |
| ಉತ್ತರಿಸುವ ಸಚಿವರು | ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿಯೇ ಪ್ರಥಮ ಬಾರಿಗೆ ಗಡಿನಾಡು ರಾಯಚೂರು ನಗರದಲ್ಲಿ ಪ್ರಾರಂಭಗೊಂಡ 'ಕರ್ನಾಟಕ ಸಂಘ'ದ ಅಭಿವೃದ್ಧಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಗಡಿನಾಡು ರಾಯಚೂರು ನಗರದಲ್ಲಿ ಪ್ರಾರಂಭಗೊಂಡಿರುವ ಕರ್ನಾಟಕ ಸಂಘವು ಅಭಿವೃದ್ಧಿ ಕಾಮಗಾರಿಗಳಿಗೆ ಧನಸಹಾಯ ಕೋರಿ ಅರ್ಜಿ ಸಲ್ಲಿಸಿದಲ್ಲಿ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. |
| ಆ) | ಗಡಿನಾಡು ಭಾಗದಲ್ಲಿರುವ ಕರ್ನಾಟಕ ಸಂಘಗಳನ್ನು ಪ್ರೋತ್ಸಾಹಿಸಲು ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳೇನು; | ಗಡಿನಾಡು ಭಾಗದಲ್ಲಿರುವ ಕರ್ನಾಟಕ ಸಂಘಗಳನ್ನು ಪ್ರೋತ್ಸಾಹಿಸಲು ಸಾಂಸ್ಕೃತಿಕ ಭವನ, ಕನ್ನಡ ಭವನ, ಬಯಲು ರಂಗಮಂದಿರ ನಿರ್ಮಾಣಕ್ಕಾಗಿ ಹಾಗೂ ಆ ಭಾಗಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಆಯಾ ಸಂಘಗಳ ಬೇಡಿಕೆಗಳಿಗನುಗುಣವಾಗಿ ಪ್ರಾಧಿಕಾರದಿಂದ ಅನುದಾನ ಲಭ್ಯತೆ ಆಧಾರದ ಮೇಲೆ ಅನುದಾನ ಬಿಡುಗಡೆ ಮಾಡಲಾಗುವುದು. |
| ಇ) | ರಾಯಚೂರು ನಗರದಲ್ಲಿ ಗಾಂಧಿಭವನ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಸದರಿ ಭವನ ನಿರ್ಮಾಣಕ್ಕೆ ಯಾವ ವರ್ಷದಲ್ಲಿ ಅನುದಾನ ಬಿಡುಗಡೆ ಮಾಡಲಾಗಿದೆ; ಪ್ರಸ್ತುತ ಕಾಮಗಾರಿ ಯಾವ ಹಂತದಲ್ಲಿದೆ? | ರಾಯಚೂರು ನಗರದಲ್ಲಿ ಗಾಂಧೀಭವನ ನಿರ್ಮಾಣ ಕಾಮಗಾರಿಯನ್ನು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ವತಿಯಿಂದ ಕೈಗೊಳ್ಳಲಾಗಿದೆ.<br>2017-18ನೇ ಸಾಲಿನಲ್ಲಿ ಸದರಿ ಭವನಕ್ಕೆ ರೂ.3.00ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ಪ್ರಸ್ತುತ ನಿವೇಶನ ಸಮತಟ್ಟು ಕಾರ್ಯ ಮುಗಿದಿದ್ದು, ಕಟ್ಟಡ ನಿರ್ಮಾಣ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ: ಕಸಂವಾ 45 ಕೆಬಿಎಲ್ ಆಕ 2020.

(ಸಿ.ಟಿ. ರವಿ)

ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು